ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಲ್ಯಾಪ್ ಟಾಪ್ ಖರೀದಿಯ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

818 (948) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಹಿಂದಿನ ಸರ್ಕಾರ ಪದವಿ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್ ಟಾಪ್ ನೀಡಿರುವ ಯೋಜನೆಯನ್ನು ಪ್ರಸ್ತುತ ಸರ್ಕಾರ ಮುಂದುವರೆಸುತ್ತಿದೆಯೇ;

(ಆ) ಮುಂದುವರಿಸುತ್ತಿದ್ದಲ್ಲಿ 2019-20/ 2020-21ನೇ ಸಾಲಿನಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್ ಟಾಪ್ ನೀಡಲಾಗಿದೆ ; (ವಿವರ ನೀಡುವುದು)

(ಇ) ಒಂದು ಲ್ಯಾಪ್ ಟಾಪ್ ಖರೀದಿಗೆ ಸರ್ಕಾರ ನೀಡುತ್ತಿರುವ ಮೊತ್ತ ಎಷ್ಟು ;

(ಈ) ಹಿಂದಿನ ಸರ್ಕಾರ ನೀಡುತ್ತಿದ್ದ ಲ್ಯಾಪ್ ಟಾಪ್‌ಗೂ ಪ್ರಸ್ತುತ ಸರ್ಕಾರ ನೀಡುತ್ತಿರುವ ಲ್ಯಾಪ್ ಟಾಪ್‌ಗೂ ಇರುವ ವ್ಯತ್ಯಾಸವೇನು ;(Configuration ಅನ್ನು ಒದಗಿಸುವುದು)

(ಉ) ಪ್ರಸ್ತುತ ಸರ್ಕಾರ ಒಂದು ಲ್ಯಾಪ್ ಟಾಪ್ ಖರೀದಿಗೆ ನೀಡುತ್ತಿರುವ ಮೊತ್ತ ಹಿಂದಿನ ಸರ್ಕಾರ ಖರೀದಿಸಲು ನೀಡಿದ್ದ ಮೊತ್ತಕ್ಕಿಂತ ದುಪ್ಪಟ್ಟು ಇದೆ ಎಂಬ ಆರೋಪವಿರುವುದು ನಿಜವೇ ;

(ಊ) ನಿಜವಾಗಿದ್ದಲ್ಲಿ, ಇದಕ್ಕೆ ಸೂಕ್ತ ಕಾರಣವನ್ನು ನೀಡುವುದು ?